# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1340 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಹೆಚ್. ಎಂ. ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು) |
| 3. | ಉತ್ತರಿಸಬೇಕಾದ ದಿನಾಂಕ | 15/03/2021 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಸಂಖ್ಯೆ ಎಷ್ಟು; ಯಾವ ಯಾವ ಉದ್ಯಮಗಳಲ್ಲಿ ಎಷ್ಟು ಕಾರ್ಮಿಕರು ಕೆಲಸ ಮಾಡುತ್ತಿದ್ದಾರೆ (ವಿವರ ನೀಡುವುದು) ರಾಜ್ಯದ ಯಾವ ಯಾವ ನಗರಗಳಲ್ಲಿ ಇ.ಎಸ್.ಐ ಆಸ್ಪತ್ರೆಗಳಿವೆ. (ಅವುಗಳ ವಿವರ ನೀಡುವುದು) | ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಸಂಖ್ಯೆಗೆ ಸಂಬಂಧಿಸಿದಂತೆ ಈವರೆಗೆ ಯಾವುದೇ ಸಮೀಕ್ಷೆ ನಡೆಸಿರುವುದಿಲ್ಲ. ಆದ್ದರಿಂದ, ಈ ಕುರಿತು ನಿಖರ ಸಂಖ್ಯೆ ಲಭ್ಯವಿರುವುದಿಲ್ಲ. ಆದರೆ, ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮಂಡಳಿಗಳಲ್ಲಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳನ್ವಯ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಮಾಹಿತಿ ಈ ಕೆಳಗಿನಂತಿದೆ.<br><br>1. <u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u> ಈ ಮಂಡಳಿಯಲ್ಲಿ ಇದುವರೆಗೂ ರಾಜ್ಯಾದ್ಯಂತ 29.59 ಲಕ್ಷ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಫಲಾನುಭವಿಗಳನ್ನಾಗಿ ನೋಂದಾಯಿಸಲಾಗಿರುತ್ತದೆ.<br><br>2. <u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ</u> ಈ ಮಂಡಳಿಯು ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಡಿ ಫಲಾನುಭವಿಗಳಾಗಿ ನೋಂದಾಯಿತರಾದ ಅಸಂಘಟಿತ ಕಾರ್ಮಿಕರ ಸಂಖ್ಯೆ ಮಂಡಳಿಯಲ್ಲಿ ಲಭ್ಯವಿದ್ದು, ಮಾಹಿತಿ ಈ ಕೆಳಕಂಡಂತಿದೆ.<br><br>(1) <u>ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:</u> ಸಾರಿಗೆ ಇಲಾಖೆಯು ಒದಗಿಸಿರುವ ದತ್ತಾಂಶದ ಪ್ರಕಾರ ಊರ್ಜಿತ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲನ ಪರವಾನಗಿ ಹೊಂದಿರುವ **8,40,561** ಚಾಲಕರಿದ್ದು, ಆ ಎಲ್ಲಾ ಚಾಲಕರು ಈ ಯೋಜನೆಯಡಿ ಫಲಾನುಭವಿಗಳಾಗಿರುತ್ತಾರೆ.<br>(2) <u>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:</u> ಈ ಯೋಜನೆಯಡಿ 11 ವರ್ಗಗಳಾದ ಹಮಾಲರು, ಗೃಹಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್ಸ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ ವೃತ್ತಿಯ **1,52,224** ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಲಾಗಿದೆ. |

(3) **ಕೋವಿಡ್-19ರ ವಿಶೇಷ ಪ್ಯಾಕೇಜ್:** ಕೋವಿಡ್-19ರ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ ಕಾರ್ಮಿಕರಿಗೆ ಸನ್ಮಾನ್ಯ ಮುಖ್ಯಮಂತ್ರಿಯವರು ಘೋಷಿಸಿದ ಒಂದು ಬಾರಿಯ ರೂ.5000 ಗಳ ವಿಶೇಷ ಪ್ಯಾಕೇಜ್ ಅಡಿ ಅರ್ಜಿ ಸಲ್ಲಿಸಿ ನೋಂದಾಯಿತರಾದ **74,782** ಅಗಸರು ಹಾಗೂ **66,820** ಕ್ಷೌರಿಕ ವೃತ್ತಿಯಲ್ಲಿ ತೊಡಗಿರುವ ಒಟ್ಟು **1,41,602** ಅರ್ಜಿ ಸಲ್ಲಿಸಿರುವ ಕಾರ್ಮಿಕರ ದತ್ತಾಂಶವು ಲಭ್ಯವಿರುತ್ತದೆ.

(4) **ಪ್ರಧಾನ ಮಂತ್ರಿ ಶ್ರಮ್ ಯೋಗಿ ಮಾನ್-ಧನ್ ಯೋಜನೆ (ಪಿಎಂ-ಎಸ್‌ವೈಎಂ):** ಈ ಯೋಜನೆಯಡಿ ಈವರೆಗೆ ಒಟ್ಟು **98,788** ಕಾರ್ಮಿಕರು ಫಲಾನುಭವಿಗಳಾಗಿ ನೋಂದಾಯಿತರಾಗಿರುತ್ತಾರೆ.

(5) **ನ್ಯೂ ಪೆನ್ಷನ್ ಸ್ಕೀಮ್ ಫಾರ್ ಟ್ರೇಡರ್ಸ್ ಅಂಡ್ ಸೆಲ್ಫ್ ಎಂಪ್ಲಾಯ್ಡ್ ಪರ್ಸನ್ಸ್:** ಈ ಯೋಜನೆಯಡಿ ಈವರೆಗೆ ಒಟ್ಟು **1,066** ಕಾರ್ಮಿಕರು ಫಲಾನುಭವಿಗಳಾಗಿ ನೋಂದಾಯಿತರಾಗಿರುತ್ತಾರೆ.

**3. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:** 20:40ರ ಅನುಪಾತದಲ್ಲಿ ವಂತಿಗೆ ಪಾವತಿಸುವ ವಿವಿಧ ಸಂಸ್ಥೆಗಳು/ ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ಸಂಘಟಿತ ಕಾರ್ಮಿಕರನ್ನು ಗುರುತಿಸಲಾಗಿದೆ. ಕಾರ್ಮಿಕ ಕಲ್ಯಾಣ ಮಂಡಳಿಯ ವ್ಯಾಪ್ತಿಗೆ 41.31 ಲಕ್ಷ ಸಂಘಟಿತ ಕಾರ್ಮಿಕರು ಒಳಪಡುತ್ತಾರೆ.

ವಿವಿಧ ಉದ್ಯಮಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರ ವಿವರ ಈ ಕೆಳಗಿನಂತಿದೆ:-

| ಕ್ರಸ | ಉದ್ಯಮಗಳ ವಿವರ | ಒಟ್ಟು ಕಾರ್ಮಿಕರ ಸಂಖ್ಯೆ |
|---|---|---|
| 1 | ಗಾರ್ಮೆಂಟ್ಸ್ | 2,94,314 |
| 2 | ಪ್ಲಾಂಟೇಷನ್ | 19,956 |
| 3 | ಕೈಗಾರಿಕೆಗಳು | 7,99,066 |
| 4 | ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳು | 30,17,783 |
| | ಒಟ್ಟು | 41,31,119 |

ರಾಜ್ಯದಲ್ಲಿ ಒಟ್ಟು 07 ಇ.ಎಸ್.ಐ. ಆಸ್ಪತ್ರೆಗಳು ಹಾಗೂ 03 ಇ.ಎಸ್.ಐ.ಸಿ. ಆಸ್ಪತ್ರೆಗಳು, 02 ರೋಗ ಪತ್ತೆ ಹಚ್ಚುವ ಕೇಂದ್ರಗಳು ಹಾಗೂ 113 ಇ.ಎಸ್.ಐ. ಚಿಕಿತ್ಸಾಲಯಗಳು ಕಾರ್ಯನಿರ್ವಹಿಸುತ್ತಿದ್ದು, ವಿವರವನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ.

| | | |
|---|---|---|
| ೬. | ಸರ್ಕಾರವು ಕಾರ್ಮಿಕರಿಗೆ ನಿಗದಿಪಡಿಸಿರುವ ಮಾಸಿಕ ವೇತನ ಮತ್ತು ಇತರೆ ಭತ್ಯೆಗಳೇನು; ಕೆಲಸ ನಿರ್ವಹಿಸುವ ಸ್ಥಳದಲ್ಲಿ ಕಾರ್ಮಿಕರಿಗೆ ಅಪಘಾತವಾಗಿ ಅಂಗವಿಕಲತೆ ಅಥವಾ ಇತರೆ ಊನಗಳು ಆದಲ್ಲಿ ಇಂತಹ ಕಾರ್ಮಿಕರಿಗೆ ಸರ್ಕಾರ ಮತ್ತು ಉದ್ಯೋಗದಾತರು ನೀಡುವ ಪರಿಹಾರಗಳೇನು; (ವಿವರ ನೀಡುವುದು) | 1. **<u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ</u>** ವತಿಯಿಂದ ನೋಂದಾಯಿತ ಫಲಾನುಭವಿಯು ನಿರ್ಮಾಣ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದರೆ ದುರ್ಬಲತೆ ಪಿಂಚಣಿ ಸೌಲಭ್ಯದಡಿ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಒದಗಿಸಲಾಗುವುದು.<br><br>**<u>ಅಪಘಾತ ಪರಿಹಾರ ಸೌಲಭ್ಯದಡಿ</u>** ನೋಂದಾಯಿತ ಫಲಾನುಭವಿಯು ಅಪಘಾತದಿಂದ ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ ರೂ.2,00,000/- ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ ರೂ.1,00,000/- ಸಹಾಯ ಧನವನ್ನು ನೀಡಲಾಗುತ್ತಿದೆ.<br><br>2. **<u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u>** ಕಾರ್ಮಿಕರಿಗೆ ಸರ್ಕಾರವು ನಿಗಧಿಪಡಿಸಿರುವ ಮಾಸಿಕ ವೇತನ ಹಾಗೂ ಇತರೆ ಭತ್ಯೆಗಳ ವಿಷಯವು, ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವ್ಯಾಪ್ತಿಗೆ ಬರುವುದಿಲ್ಲ.<br><br>ಅಪಘಾತ ಪರಿಹಾರಕ್ಕೆ ಸಂಬಂಧಿಸಿದಂತೆ ಮಂಡಳಿಯು, **"ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"**ಯನ್ನು ಜಾರಿಗೊಳಿಸುತ್ತಿದ್ದು, ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಲಾಯಿಸಲು ಸಾರಿಗೆ ಇಲಾಖೆಯಿಂದ ಊರ್ಜಿತ ಚಾಲನ ಪರವಾನಗಿ ಹೊಂದಿರುವ ಎಲ್ಲಾ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಈ ಯೋಜನೆಯ ಫಲಾನುಭವಿಗಳಾಗಿದ್ದು, ಸೌಲಭ್ಯಗಳ ವಿವರ ಈ ಕೆಳಗಿನಂತಿದೆ:<br><br>**(ಅ) ಅಪಘಾತ ಪರಿಹಾರ ಸೌಲಭ್ಯ:**<br>➢ ಅಪಘಾತದಿಂದ ಮರಣ ಹೊಂದಿದಲ್ಲಿ, ಅವರ ನಾಮನಿರ್ದೇಶಿತರಿಗೆ ರೂ.5 ಲಕ್ಷ ಪರಿಹಾರ.<br>ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ<br>➢ ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ಗರಿಷ್ಠ ರೂ.2 ಲಕ್ಷದ ವರೆಗೆ ಪರಿಹಾರ.<br>➢ ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ-<br>❖ ಅಪಘಾತಕೊಳ್ಳಗಾಗಿ ಆಸ್ಪತ್ರೆಯಲ್ಲಿ 15 ದಿನಗಳಿಗಿಂತ ಕಡಿಮೆ ಅವಧಿಗೆ ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ, ಗರಿಷ್ಠ ರೂ. 50,000/- ರವರೆಗೆ; ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಪಾವತಿಸಲಾಗುವುದು.<br>❖ 15 ದಿನಗಳಿಗಿಂತ ಹೆಚ್ಚು ದಿನ ಒಳರೋಗಿಯಾಗಿ ಚಿಕಿತ್ಸೆ ಪಡೆದಿದ್ದಲ್ಲಿ, ಗರಿಷ್ಠ ರೂ. 1 ಲಕ್ಷದವರೆಗೆ ಅಥವಾ |

| | | |
|---|---|---|
| | | ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೋ ಅದನ್ನು ಪಾವತಿಸಲಾಗುವುದು.<br><br>(ಆ) **ಶೈಕ್ಷಣಿಕ ಧನಸಹಾಯ:**<br>ಅಪಘಾತದಿಂದ ನಿಧನರಾದ ಹಾಗೂ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರು ಯೋಜನೆಯಡಿ ನೋಂದಾಯಿತ ನಿರ್ವಾಹಕರು ಹಾಗೂ ಕ್ಲೀನರ್‌ಗಳ ಗರಿಷ್ಠ ಇಬ್ಬರು ಮಕ್ಕಳಿಗೆ 1 ರಿಂದ 12ನೇ ತರಗತಿಯವರೆಗೆ ವ್ಯಾಸಂಗಕ್ಕಾಗಿ ವಾರ್ಷಿಕ ತಲಾ ರೂ. 10,000/-ಗಳ ಶೈಕ್ಷಣಿಕ ಧನ ಸಹಾಯ ನೀಡಲಾಗುತ್ತಿದೆ.<br><br>3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ** ಈ ಮಂಡಳಿಯಲ್ಲಿ ಕಾರ್ಮಿಕರಿಗಾಗಿ ಯಾವುದೇ ಮಾಸಿಕ ವೇತನ ಭತ್ಯೆಗಳನ್ನು ನೀಡಲು ಅವಕಾಶವಿರುವುದಿಲ್ಲ.<br>ಕೆಲಸ ನಿರ್ವಹಿಸುವ ಸ್ಥಳದಲ್ಲಿ ಸಂಘಟಿತ ಕಾರ್ಮಿಕರಿಗೆ ಅಪಘಾತವಾದಲ್ಲಿ ಕಾರ್ಮಿಕ ಕಲ್ಯಾಣ ಯೋಜನೆಯಡಿಯಲ್ಲಿ ಕನಿಷ್ಠ ರೂ. 1,000/- ಗರಿಷ್ಠ ರೂ. 3,000/- ರವರೆಗೆ ಧನ ಸಹಾಯ ನೀಡಲಾಗುವುದು.<br>ವಿಮಾದಾರರಿಗೆ ಹಾಗೂ ಅವರ ಕುಟುಂಬದವರಿಗೆ ಅಂಗವಿಕಲತೆಗೆ ಪರಿಹಾರವನ್ನು ಒಳಗೊಂಡಂತೆ ಈ ಕೆಳಕಂಡ ಪ್ರಮುಖ ಸೌಲಭ್ಯಗಳನ್ನು ಕಾರ್ಮಿಕರ ರಾಜ್ಯ ವಿಮಾ ನಿಗಮವು ವಿಸ್ತರಿಸುತ್ತಿದೆ.<br>1. ಪೂರ್ಣ ಪ್ರಮಾಣದ ವೈದ್ಯಕೀಯ ಸೌಲಭ್ಯ<br>2. ಖಾಯಿಲೆಯಿಂದ ಸಂಬಳ ಕಡಿತದ ವಿರುದ್ಧ ಭದ್ರತೆ<br>3. ಪ್ರಸವ ಸೌಲಭ್ಯ<br>4. ಅಂಗವಿಕಲತೆಗೆ ಪರಿಹಾರ<br>5. ಅವಲಂಬಿತರಿಗೆ ಪರಿಹಾರ<br>6. ಶವ ಸಂಸ್ಕಾರ ವೆಚ್ಚ<br>7. ನಿರುದ್ಯೋಗ ಭತ್ಯೆ (ರಾಜೀವ್ ಗಾಂಧಿ ಶ್ರಮಿಕ ಕಲ್ಯಾಣ ಯೋಜನೆ) |
| ಇ) | ಸರ್ಕಾರವು ಕಾರ್ಮಿಕರ ಶ್ರೇಯೋಭಿವೃದ್ಧಿಗಾಗಿ ಅನುಷ್ಠಾನಗೊಳಿಸಿರುವ ಯೋಜನೆಗಳು ಯಾವುವು; ಈ ಯೋಜನೆಗಳ ಮಾನದಂಡಗಳೇನು: ಈ ಯೋಜನೆಗಳಡಿ ಕಳೆದೆರಡು ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿ ಪ್ರಯೋಜನ ಪಡೆದಿರುವ ಕಾರ್ಮಿಕರ ಸಂಖ್ಯೆ ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು)? | 1. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ** ನೋಂದಾಯಿತ ಕಾರ್ಮಿಕರ ಶ್ರೇಯೋಭಿವೃದ್ಧಿಗಾಗಿ 19 ವಿವಿಧ ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಲಾಗಿರುತ್ತದೆ. ವಿವರಗಳನ್ನು **ಅನುಬಂಧ-2**ರಲ್ಲಿ ಲಗತ್ತಿಸಿದೆ. ಈ ಯೋಜನೆಗಳ ಮಾನದಂಡಗಳನ್ನು **ಅನುಬಂಧ-3ರಲ್ಲಿ** ಲಗತ್ತಿಸಿದೆ. ಈ ಯೋಜನೆಗಳಡಿ ಕಳೆದೆರಡು ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿ ಪ್ರಯೋಜನ ಪಡೆದಿರುವ ಕಾರ್ಮಿಕರ ಸಂಖ್ಯೆ 14,049 ಆಗಿರುತ್ತದೆ.<br>ತಾಲ್ಲೂಕುವಾರು ಮಾಹಿತಿಯನ್ನು **ಅನುಬಂಧ-4 ಮತ್ತು ಅನುಬಂಧ-4ಎರಲ್ಲಿ** ಲಗತ್ತಿಸಿದೆ. |

**2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು,** ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು, ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.

**(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-**

ಈ ಯೋಜನೆಯಡಿ, ಸಾರಿಗೆ ಇಲಾಖೆಯಲ್ಲಿ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಲಾಯಿಸಲು ಊರ್ಜಿತ ಚಾಲನಾ ಪರವಾನಗಿ ಹೊಂದಿದ ಚಾಲಕರು, ಯೋಜನೆಯಡಿ ನೋಂದಾಯಿತ ನಿರ್ವಾಹಕರು ಹಾಗೂ ಕ್ಲೀನರ್‌ಗಳು ಫಲಾನುಭವಿಯಾಗಿದ್ದು, ನೀಡುತ್ತಿರುವ ಸೌಲಭ್ಯಗಳು ಹಾಗೂ ಮಾನದಂಡಗಳು ಈ ಕೆಳಗಿನಂತಿವೆ:

**(ಅ) ಅಪಘಾತ ಪರಿಹಾರ:**

ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ. ಯೋಜನೆಯು ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಅನ್ವಯಿಸುತ್ತದೆ.

- ವಯೋಮಿತಿ 20 ರಿಂದ 70 ವರ್ಷಗಳು.
- ಯೋಜನೆಯ ಸೌಲಭ್ಯಗಳು ಕರ್ತವ್ಯದಲ್ಲಿರುವಾಗ ಹಾಗೂ ಇಲ್ಲದಿರುವಾಗಲೂ ಸಂಭವಿಸಿದ ಅಪಘಾತ ಪ್ರಕರಣಗಳಲ್ಲಿ ಸಹ ಲಭ್ಯವಾಗುತ್ತವೆ.
- ಚಾಲಕರು, ಕರ್ನಾಟಕ ರಾಜ್ಯ ಸಾರಿಗೆ ಇಲಾಖೆಯಿಂದ ವಾಣಿಜ್ಯ ವಾಹನ ಚಲಾಯಿಸಲು ಊರ್ಜಿತ ಚಾಲನಾ ಪರವಾನಗಿಯನ್ನು ಹೊಂದಿರಬೇಕು.
- ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ ಕಳೆದ ಎರಡು ವರ್ಷಗಳಲ್ಲಿ ಒಟ್ಟು **16** "ಅಪಘಾತ ಪ್ರಕರಣ"ಗಳಲ್ಲಿ ರೂ. **66,30,000/-**ಗಳ ಅಪಘಾತ ಪರಿಹಾರ ನೀಡಲಾಗಿರುತ್ತದೆ.

**(ಆ) ಶೈಕ್ಷಣಿಕ ಧನಸಹಾಯ:**

- ➢ ಫಲಾನುಭವಿಯ ಪೋಷಕರು ಖಾಸಗಿ ವಾಣಿಜ್ಯ ಚಾಲಕರಾಗಿದ್ದು, ಅಪಘಾತದಿಂದ ಮರಣ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿರಬೇಕು.
- ➢ 1 ರಿಂದ 12ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರಬೇಕು. ಹಾಗೂ ಈ ಕುರಿತು ದಾಖಲೆಗಳನ್ನು ಸಲ್ಲಿಸಬೇಕು.
- ➢ ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ ಕಳೆದ ಎರಡು ವರ್ಷಗಳಲ್ಲಿ ಒಟ್ಟು **10** ವಿದ್ಯಾರ್ಥಿಗಳಿಗೆ ತಲಾ ರೂ. 10,000/-ಗಳಂತೆ ರೂ. **1,00,000/-** ಗಳ

"ಶೈಕ್ಷಣಿಕ ಧನಸಹಾಯ" ವಿತರಿಸಲಾಗಿರುತ್ತದೆ.

(2) **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**

ಈ ಯೋಜನೆಯಡಿ ಪ್ರಸ್ತುತ 11 ವರ್ಗಗಳಾದ ಹಮಾಲರು, ಗೃಹಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್ಸ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ ವೃತ್ತಿಯಲ್ಲಿ ತೊಡಗಿರುವ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ನೀಡಲಾಗುತ್ತಿದೆ.

ಮಾನದಂಡಗಳು:

- ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.
- ವಯೋಮಿತಿ 18 ರಿಂದ 60 ವರ್ಷಗಳು.
- ಪ್ರಸ್ತುತ 11 ವಲಯಗಳಾದ ಹಮಾಲರು, ಗೃಹಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್ಸ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ ವೃತ್ತಿಯ ಅಸಂಘಟಿತ ಕಾರ್ಮಿಕರಿಗೆ ಮಾತ್ರ ಅನ್ವಯಿಸುತ್ತದೆ.

ಈ ಯೋಜನೆಯಡಿ ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ ಕಳೆದ ಎರಡು ವರ್ಷಗಳಲ್ಲಿ 11 ವರ್ಗಗಳ ಒಟ್ಟು **1,893** ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಲಾಗಿರುತ್ತದೆ.

ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ, ಅಪಘಾತ ಪರಿಹಾರ, ಶೈಕ್ಷಣಿಕ ಧನಸಹಾಯ ಪಡೆದ ಮತ್ತು ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆಯಡಿ ನೋಂದಣಿಯಾದ ಫಲಾನುಭವಿಗಳ ತಾಲೂಕುವಾರು ವಿವರ **ಅನುಬಂಧ-5ರಲ್ಲಿ** ಲಗತ್ತಿಸಿದೆ.

(3) **ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ-ಎಸ್‌ವೈಎಂ):-**

ಈ ಯೋಜನೆಯಡಿ ನೋಂದಾಯಿತ ಅಸಂಘಟಿತ ವಲಯದ ಕಾರ್ಮಿಕರು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/-ಗಳ ಪಿಂಚಣಿ ಸೌಲಭ್ಯ ಒದಗಿಸಲಾಗುತ್ತದೆ.

ಮಾನದಂಡಗಳು:

ಅಸಂಘಟಿತ ವಲಯದ ಕಾರ್ಮಿಕರಾಗಿದ್ದು 18-40 ವರ್ಷದೊಳಗಿರಬೇಕು.

ಮಾಸಿಕ ಆದಾಯ ರೂ.15,000/- ಕ್ಕಿಂತ ಕಡಿಮೆಯಿರಬೇಕು.

ಆದಾಯ ತೆರಿಗೆ/ಇಎಸ್‌ಐ/ ಇಪಿಎಫ್‌ಒ/ ನ್ಯಾಷನಲ್ ಪೆನ್‌ಷನ್ ಸ್ಕೀಮ್ ವ್ಯಾಪ್ತಿಗೆ ಒಳಪಟ್ಟಿರಬಾರದು.

ಈ ಯೋಜನೆಯಡಿ ಇಲ್ಲಿಯವರೆಗೆ ಹಾಸನ ಜಿಲ್ಲೆಗೆ ಸಂಬಂಧಿಸಿದ ಒಟ್ಟು 2,596 ಕಾರ್ಮಿಕರನ್ನು ಫಲಾನುಭವಿಯಾಗಿ ನೋಂದಾಯಿಸಲಾಗಿದೆ.

<u>ನ್ಯೂ ಪೆನ್ಷನ್ ಸ್ಕೀಮ್ ಫಾರ್ ಟ್ರೇಡರ್ಸ್ ಅಂಡ್ ಸೆಲ್ಫ್ ಎಂಪ್ಲಾಯ್ಡ್ ಪರ್ಸನ್ಸ್:</u>

ಈ ಯೋಜನೆಯಡಿ ನೋಂದಾಯಿತ ಅಂಗಡಿ ಮಾಲೀಕರು, ಚಿಲ್ಲರೆ ವ್ಯಾಪಾರಿಗಳು, ಅಕ್ಕಿ ಗಿರಣಿ ಮಾಲೀಕರು, ಎಣ್ಣೆ ಗಿರಣಿ ಮಾಲೀಕರು, ವರ್ಕ್‌ಶಾಪ್ ಮಾಲೀಕರು, ಕಮಿಷನ್ ಏಜೆಂಟ್ಸ್, ರಿಯಲ್ ಎಸ್ಟೇಟ್‌ನ ಬ್ರೋಕರ್ಸ್, ಸಣ್ಣ ಹೋಟೆಲ್ ಹಾಗೂ ರೆಸ್ಟೋರೆಂಟ್‌ನ ಮಾಲೀಕರು ಹಾಗೂ ಅಂತಹ ಇತರೆ ಸಣ್ಣ ವ್ಯಾಪಾರಗಳಲ್ಲಿ ತೊಡಗಿಸಿಕೊಂಡ ವ್ಯಾಪಾರಿಗಳು/ ಲಘು ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಿಗಳು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/-ಗಳ ಪಿಂಚಣಿ ಸೌಲಭ್ಯ ಒದಗಿಸಲಾಗುತ್ತದೆ.

<u>ಮಾನದಂಡಗಳು:-</u>

18ರಿಂದ 40 ವರ್ಷದವರಾಗಿರಬೇಕು.

ವಾರ್ಷಿಕ ವಹಿವಾಟು ಗರಿಷ್ಠ ರೂ. 1.50 ಕೋಟಿಗಳ ಒಳಗಿರಬೇಕು.

ಆದಾಯ ತೆರಿಗೆ ಪಾವತಿಸುವವರಾಗಿರಬಾರದು. ಇ.ಎಸ್.ಐ/ ಇ.ಪಿ.ಎಫ್/ ಎನ್.ಪಿ.ಎಸ್/ ಪಿಎಂಎಸ್‌ವೈಎಂ/ ಪಿ.ಎಂ.ಕೆ.ಎಂ.ವೈ. ಯೋಜನೆಯ ಫಲಾನುಭವಿಗಳಾಗಿರಬಾರದು.

ಈ ಯೋಜನೆಯಡಿ ಇಲ್ಲಿಯವರೆಗೆ ಹಾಸನ ಜಿಲ್ಲೆಗೆ ಸಂಬಂಧಿಸಿದ ಒಟ್ಟು 27 ಕಾರ್ಮಿಕರನ್ನು ಫಲಾನುಭವಿಯಾಗಿ ನೋಂದಾಯಿಸಲಾಗಿದೆ.

**3. <u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:</u> ಈ ಮಂಡಳಿಯು ಸಂಘಟಿತ ಕಾರ್ಮಿಕರ** ಶ್ರೇಯೋಭಿವೃದ್ಧಿಗಾಗಿ ಈ ಕೆಳಗಿನ ಕಲ್ಯಾಣ ಯೋಜನೆಗಳನ್ನು ಅನುಷ್ಠಾನಗೊಳಿಸಿರುತ್ತದೆ. ಮಂಡಳಿಗೆ ವಂತಿಗೆ ಪಾವತಿ ಮಾಡುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಈ ಯೋಜನೆಗಳ ಸೌಲಭ್ಯಗಳನ್ನು ನೀಡಲಾಗುತ್ತಿದೆ.

1. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ
2. ವೈದ್ಯಕೀಯ ನೆರವು.
3. ಅಪಘಾತ ಧನ ಸಹಾಯ.
4. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ.
5. ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರಕ್ಕೆ ಧನ ಸಹಾಯ.
6. ವಾರ್ಷಿಕ ಕ್ರೀಡಾಕೂಟ ಹಮ್ಮಿಕೊಳ್ಳುವ ಕಾರ್ಮಿಕ ಸಂಘಟನೆಗೆ ಧನ ಸಹಾಯ.

ಕಳೆದೆರಡು ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿ ಪ್ರಯೋಜನ ಪಡೆದಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರ ವಿವರಗಳು ಈ ಕೆಳಕಂಡಂತಿದೆ.

| ಹಾಸನ ಜಿಲ್ಲೆ | | | |
|---|---|---|---|
| ಕ್ರ.ಸಂ | ವರ್ಷ | ಫಲಾನುಭವಿ | ಮೊತ್ತ |
| 1 | 2018-19 | 474 | 19,98,000 |
| 2 | 2019-20 | 1215 | 47,09,000 |

ಹಾಸನ ಜಿಲ್ಲೆಯ ತಾಲ್ಲೂಕುವಾರು ವಿವರಗಳು ಅನುಬಂಧ-6 ರಲ್ಲಿ ಲಗತ್ತಿಸಿದೆ.

ಕಾಇ 92 ಎಲ್‌ಇಟಿ 2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ-1

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1340)

| ಕ್ರಮಸಂಖ್ಯೆ | ಕಾ.ರಾ.ವಿಆಸ್ಪತ್ರೆಗಳು | ಸ್ಥಳ |
|---|---|---|
| 1 | ಕಾ.ರಾ.ವಿಆಸ್ಪತ್ರೆ | ಇಂದಿರಾನಗರ, ಬೆಂಗಳೂರು |
| 2 | ಕಾ.ರಾ.ವಿಆಸ್ಪತ್ರೆ | ಮಂಗಳೂರು |
| 3 | ಕಾ.ರಾ.ವಿಆಸ್ಪತ್ರೆ | ದಾವಣಗೆರೆ |
| 4 | ಕಾ.ರಾ.ವಿಆಸ್ಪತ್ರೆ | ಹುಬ್ಬಳ್ಳಿ |
| 5 | ಕಾ.ರಾ.ವಿಆಸ್ಪತ್ರೆ | ಬೆಳಗಾಂ |
| 6 | ಕಾ.ರಾ.ವಿಆಸ್ಪತ್ರೆ | ಮೈಸೂರು |
| 7 | ಕಾ.ರಾ.ವಿಆಸ್ಪತ್ರೆ | ದಾಂಡೇಲಿ |
| 8 | ರೋಗಪತ್ರೆಹಚ್ಚುವಕೇಂದ್ರ, ಬಸವನಗುಡಿ | ಬೆಂಗಳೂರು |
| 9 | ರೋಗಪತ್ರೆಹಚ್ಚುವಕೇಂದ್ರ, | ನಂಜನಗೂಡು |
| | ಕಾ.ರಾ.ವಿಚಿಕಿತ್ಸಾಲಯಗಳು | ಬೆಂಗಳೂರುನಗರ |
| 1 | ಕಾರಾವಿಚಿಕಿತ್ಸಾಲಯ | ಬನಶಂಕರಿ |
| 2 | ಕಾರಾವಿಚಿಕಿತ್ಸಾಲಯ | ಬಸವನಗುಡಿ |
| 3 | ಕಾರಾವಿಚಿಕಿತ್ಸಾಲಯ | ಬೊಮ್ಮನಹಳ್ಳಿ |
| 4 | ಕಾರಾವಿಚಿಕಿತ್ಸಾಲಯ | ಬಿನ್ನಿಪೇಟೆ |
| 5 | ಕಾರಾವಿಚಿಕಿತ್ಸಾಲಯ | ಬೊಮ್ಮಸಂದ್ರ |
| 6 | ಕಾರಾವಿಚಿಕಿತ್ಸಾಲಯ | ಕಾಟನ್‌ಪೇಟೆ |
| 7 | ಕಾರಾವಿಚಿಕಿತ್ಸಾಲಯ | ದಾಸರಹಳ್ಳಿ |
| 8 | ಕಾರಾವಿಚಿಕಿತ್ಸಾಲಯ | ದ್ಯಾವಸಂದ್ರ |
| 9 | ಕಾರಾವಿಚಿಕಿತ್ಸಾಲಯ | ಪ್ರೇಜರ ಟೌನ |
| 10 | ಕಾರಾವಿಚಿಕಿತ್ಸಾಲಯ | ಹನುಮಂತನಗರ |
| 11 | ಕಾರಾವಿಚಿಕಿತ್ಸಾಲಯ | ಜಯನಗರ |
| 12 | ಕಾರಾವಿಚಿಕಿತ್ಸಾಲಯ | ಜಾಲಹಳ್ಳಿ |
| 13 | ಕಾರಾವಿಚಿಕಿತ್ಸಾಲಯ | ಕೆ.ಆರ್.ಪುರಂ-1 |
| 14 | ಕಾರಾವಿಚಿಕಿತ್ಸಾಲಯ | ಕೆ.ಆರ್.ಪುರಂ-2 |
| 15 | ಕಾರಾವಿಚಿಕಿತ್ಸಾಲಯ | ಕೆಂಗೇರಿ |
| 16 | ಕಾರಾವಿಚಿಕಿತ್ಸಾಲಯ | ಕೋಣನಕುಂಟೆ |
| 17 | ಕಾರಾವಿಚಿಕಿತ್ಸಾಲಯ | ಮೈಸೂರುರಸ್ತೆ |
| 18 | ಕಾರಾವಿಚಿಕಿತ್ಸಾಲಯ | ಮಾಗಡಿರಸ್ತೆ |
| 19 | ಕಾರಾವಿಚಿಕಿತ್ಸಾಲಯ | ಮಾರತಹಳ್ಳಿ |

| | | |
|---|---|---|
| 20 | ಕಾರಾವಿಚಿಕಿತ್ಸಾಲಯ | ಮುನಿರೆಡ್ಡಿಪಾಳ್ಯ |
| 21 | ಕಾರಾವಿಚಿಕಿತ್ಸಾಲಯ | ಮಾರತ್‌ಹಳ್ಳಿ |
| 22 | ಕಾರಾವಿಚಿಕಿತ್ಸಾಲಯ | ಪೀಣ್ಯ |
| 23 | ಕಾರಾವಿಚಿಕಿತ್ಸಾಲಯ | ರಾಜಾಜಿನಗರ–1 |
| 24 | ಕಾರಾವಿಚಿಕಿತ್ಸಾಲಯ | ರಾಜಾಜಿನಗರ–2 |
| 25 | ಕಾರಾವಿಚಿಕಿತ್ಸಾಲಯ | ರಸಲ್ ಮಾರ್ಕೇಟ್–2 |
| 26 | ಕಾರಾವಿಚಿಕಿತ್ಸಾಲಯ | ಶೇಷಾದ್ರಿಪುರಂ |
| 27 | ಕಾರಾವಿಚಿಕಿತ್ಸಾಲಯ | ಶ್ರೀರಾಮಪುರಂ |
| 28 | ಕಾರಾವಿಚಿಕಿತ್ಸಾಲಯ | ಸುಬ್ರಮಣ್ಯಪುರಂ |
| 29 | ಕಾರಾವಿಚಿಕಿತ್ಸಾಲಯ | ವಿಜಯನಗರ |
| 30 | ಕಾರಾವಿಚಿಕಿತ್ಸಾಲಯ | ವಿಶ್ವನೀಡಂ |
| 31 | ಕಾರಾವಿಚಿಕಿತ್ಸಾಲಯ | ವಿವೇಕನಗರ |
| 32 | ಕಾರಾವಿಚಿಕಿತ್ಸಾಲಯ | ವೈಟ್‌ಫೀಲ್ಡ್ |
| 33 | ಕಾರಾವಿಚಿಕಿತ್ಸಾಲಯ | ವಿಲ್ಸನ್‌ಗಾರ್ಡನ್ |
| 34 | ಕಾರಾವಿಚಿಕಿತ್ಸಾಲಯ | ಯಶವಂತಪುರ |
| 35 | ಕಾರಾವಿಚಿಕಿತ್ಸಾಲಯ | ಯಲಹಂಕ |
| 36 | ಕಾರಾವಿಚಿಕಿತ್ಸಾಲಯ | ಹಲಸೂರು |
| 37 | ಕಾರಾವಿಚಿಕಿತ್ಸಾಲಯ | ಲಗ್ಗೆರೆ |
| 38 | ಕಾರಾವಿಚಿಕಿತ್ಸಾಲಯ | ಅತ್ತಿಬೆಲೆ |
| 39 | ಕಾರಾವಿಚಿಕಿತ್ಸಾಲಯ | ಸಿಂಗಸಂದ್ರ |
| 40 | ಕಾರಾವಿಚಿಕಿತ್ಸಾಲಯ | ಜಿಗಣಿ |
| | ಬೆಂಗಳೂರುಗ್ರಾಮಾಂತರ | |
| 41 | ಕಾರಾವಿಚಿಕಿತ್ಸಾಲಯ | ಚನ್ನಪಟ್ಟಣ |
| 42 | ಕಾರಾವಿಚಿಕಿತ್ಸಾಲಯ | ದೊಡ್ಡಬಳ್ಳಾಪುರ |
| 43 | ಕಾರಾವಿಚಿಕಿತ್ಸಾಲಯ | ಹೊಸಕೋಟೆ |
| 44 | ಕಾರಾವಿಚಿಕಿತ್ಸಾಲಯ | ಗೊಟ್ಟಿಗೆರೆ |
| 45 | ಕಾರಾವಿಚಿಕಿತ್ಸಾಲಯ | ನೆಲಮಂಗಲ |
| 46 | ಕಾರಾವಿಚಿಕಿತ್ಸಾಲಯ | ದೇವನಹಳ್ಳಿ |
| | ಚಿತ್ರದುರ್ಗಜಿಲ್ಲೆ | |
| 47 | ಕಾರಾವಿಚಿಕಿತ್ಸಾಲಯ | ಚಿತ್ರದುರ್ಗ |
| | ದಾವಣಗೆರೆಜಿಲ್ಲೆ | |
| 48 | ಕಾರಾವಿಚಿಕಿತ್ಸಾಲಯ | ಸಿಟಿದಾವಣಗೆರೆ |

| | | |
|---|---|---|
| 49 | ಕಾರಾವಿಚಿಕಿತ್ಸಾಲಯ | ಹರಿಹರ |
| 50 | ಕಾರಾವಿಚಿಕಿತ್ಸಾಲಯ | ಕೆ.ಜಿ. ಬಡಾವಣೆ |
| ಕೋಲಾರಜಿಲ್ಲೆ | | |
| 51 | ಕಾರಾವಿಚಿಕಿತ್ಸಾಲಯ | ರಾಬರ್ಟಸನ್ಪೇಟೆ |
| 52 | ಕಾರಾವಿಚಿಕಿತ್ಸಾಲಯ | ಮಾಲೂರು |
| ಶಿವಮೊಗ್ಗಜಿಲ್ಲೆ | | |
| 53 | ಕಾರಾವಿಚಿಕಿತ್ಸಾಲಯ | ಭದ್ರಾವತಿ |
| 54 | ಕಾರಾವಿಚಿಕಿತ್ಸಾಲಯ | ಎಂ.ಪಿ.ಎಂ. ಭದ್ರಾವತಿ |
| 55 | ಕಾರಾವಿಚಿಕಿತ್ಸಾಲಯ | ಶಿವಮೊಗ್ಗ |
| 56 | ಕಾರಾವಿಚಿಕಿತ್ಸಾಲಯ | ಸಾಗರರಸ್ತೆ |
| 57 | ಕಾರಾವಿಚಿಕಿತ್ಸಾಲಯ | ಎನ್.ಟಿ. ರಸ್ತೆ |
| ತುಮಕೂರುಜಿಲ್ಲೆ | | |
| 58 | ಕಾರಾವಿಚಿಕಿತ್ಸಾಲಯ | ತುಮಕೂರು |
| 59 | ಕಾರಾವಿಚಿಕಿತ್ಸಾಲಯ | ಕುಣಿಗಲ್ |
| 60 | ಕಾರಾವಿಚಿಕಿತ್ಸಾಲಯ | ತಿಪಟೂರು |
| ರಾಮನಗರಜಿಲ್ಲೆ | | |
| 61 | ಕಾರಾವಿಚಿಕಿತ್ಸಾಲಯ | ರಾಮನಗರ |
| 62 | ಕಾರಾವಿಚಿಕಿತ್ಸಾಲಯ | ಬಿಡದಿ |
| ದಕ್ಷಿಣಕನ್ನಡಜಿಲ್ಲೆ | | |
| 63 | ಕಾರಾವಿಚಿಕಿತ್ಸಾಲಯ | ಕರಂಗಲ್ಪಾಡಿ |
| 64 | ಕಾರಾವಿಚಿಕಿತ್ಸಾಲಯ | ಕುಲಶೇಖರ |
| 65 | ಕಾರಾವಿಚಿಕಿತ್ಸಾಲಯ | ಮಾರ್ಗನ್ಸ್ ಗೇಟ್ |
| 66 | ಕಾರಾವಿಚಿಕಿತ್ಸಾಲಯ | ಪಣಂಬೂರು |
| 67 | ಕಾರಾವಿಚಿಕಿತ್ಸಾಲಯ | ಮುತ್ತೂರು |
| ಹಾಸನಜಿಲ್ಲೆ | | |
| 68 | ಕಾರಾವಿಚಿಕಿತ್ಸಾಲಯ | ಹಾಸನ |
| ಮಂಡ್ಯಜಿಲ್ಲೆ | | |
| 69 | ಕಾರಾವಿಚಿಕಿತ್ಸಾಲಯ | ಮಂಡ್ಯ |
| 70 | ಕಾರಾವಿಚಿಕಿತ್ಸಾಲಯ | ಬೆಳಗೊಳ |
| 71 | ಕಾರಾವಿಚಿಕಿತ್ಸಾಲಯ | ಮದ್ದೂರು |
| ಮೈಸೂರುಜಿಲ್ಲೆ | | |
| 72 | ಕಾರಾವಿಚಿಕಿತ್ಸಾಲಯ | ಬೆಳವಾಡಿ |

| | | |
|---|---|---|
| 73 | ಕಾರಾವಿಚಿಕಿತ್ಸಾಲಯ | ಹುಣಸೂರು |
| 74 | ಕಾರಾವಿಚಿಕಿತ್ಸಾಲಯ | ಬೃಂದಾವನಬಡಾವಣೆ |
| 75 | ಕಾರಾವಿಚಿಕಿತ್ಸಾಲಯ | ಕೇಂದ್ರ, ಮೈಸೂರು |
| 76 | ಕಾರಾವಿಚಿಕಿತ್ಸಾಲಯ | ದಕ್ಷಿಣ, ಮೈಸೂರು |
| 77 | ಕಾರಾವಿಚಿಕಿತ್ಸಾಲಯ | ಎನ್.ಆರ್. ಮೊಹಲ್ಲಾ |
| 78 | ಕಾರಾವಿಚಿಕಿತ್ಸಾಲಯ | ನಂಜನಗೂಡು |
| 79 | ಕಾರಾವಿಚಿಕಿತ್ಸಾಲಯ | ಟಿ. ನರಸೀಪುರ |
| 80 | ಕಾರಾವಿಚಿಕಿತ್ಸಾಲಯ | ವಿ.ವಿ.ಪುರಂ |
| | ಉಡುಪಿಜಿಲ್ಲೆ | |
| 81 | ಕಾರಾವಿಚಿಕಿತ್ಸಾಲಯ | ಮಣಿಪಾಲ್ |
| 82 | ಕಾರಾವಿಚಿಕಿತ್ಸಾಲಯ | ಉಡುಪಿ |
| 83 | ಕಾರಾವಿಚಿಕಿತ್ಸಾಲಯ | ಕಾರ್ಕಳ |
| 84 | ಕಾರಾವಿಚಿಕಿತ್ಸಾಲಯ | ಕುಂದಾಪುರ |
| | ಬೆಳಗಾವಿಜಿಲ್ಲೆ | |
| 85 | ಕಾರಾವಿಚಿಕಿತ್ಸಾಲಯ | ಆನಂದವಾಡಿ (ಶಹಾಪುರ) |
| 86 | ಕಾರಾವಿಚಿಕಿತ್ಸಾಲಯ | ಪೀರನವಾಡಿ |
| 87 | ಕಾರಾವಿಚಿಕಿತ್ಸಾಲಯ | ಗೋಕಾಕ್ |
| 88 | ಕಾರಾವಿಚಿಕಿತ್ಸಾಲಯ | ಕೊಣ್ಣೂರು |
| 89 | ಕಾರಾವಿಚಿಕಿತ್ಸಾಲಯ | ಕೆ.ಎಸ್.ಆರ್.ಟಿ.ಸಿ. ಬೆಳಗಾವಿ |
| 90 | ಕಾರಾವಿಚಿಕಿತ್ಸಾಲಯ | ಉದ್ಯಮ್ ಭಾಗ (ಭಾಗ್ಯನಗರ) |
| 91 | ಕಾರಾವಿಚಿಕಿತ್ಸಾಲಯ | ಯಮುನಾಪುರ |
| 92 | ಕಾರಾವಿಚಿಕಿತ್ಸಾಲಯ | ನಿಪ್ಪಾಣಿ |
| | ಧಾರವಾಡಜಿಲ್ಲೆ | |
| 93 | ಕಾರಾವಿಚಿಕಿತ್ಸಾಲಯ | ಧಾರವಾಡ |
| 94 | ಕಾರಾವಿಚಿಕಿತ್ಸಾಲಯ | ಹುಬ್ಬಳ್ಳಿ-1 |
| 95 | ಕಾರಾವಿಚಿಕಿತ್ಸಾಲಯ | ಬೇಲೂರು |
| 96 | ಕಾರಾವಿಚಿಕಿತ್ಸಾಲಯ | ತಾರಿಹಾಳ |
| 97 | ಕಾರಾವಿಚಿಕಿತ್ಸಾಲಯ | ಗೋಕುಲ |
| 98 | ಕಾರಾವಿಚಿಕಿತ್ಸಾಲಯ | ವರೂರು |
| | ಗದಗಜಿಲ್ಲೆ | |
| 99 | ಕಾರಾವಿಚಿಕಿತ್ಸಾಲಯ | ಗದಗ |
| 100 | ಕಾರಾವಿಚಿಕಿತ್ಸಾಲಯ | ಹುಲಕೋಟಿ |

| | | |
|---|---|---|
| ಉತ್ತರಕನ್ನಡಜಿಲ್ಲೆ | | |
| 101 | ಕಾರಾವಿಚಿಕಿತ್ಸಾಲಯ | ದಾಂಡೇಲಿ |
| ಬಾಗಲಕೋಟೆಜಿಲ್ಲೆ | | |
| 102 | ಕಾರಾವಿಚಿಕಿತ್ಸಾಲಯ | ಬಾಗಲಕೋಟೆ |
| 103 | ಕಾರಾವಿಚಿಕಿತ್ಸಾಲಯ | ಬನಹಟ್ಟಿ |
| ಬಳ್ಳಾರಿಜಿಲ್ಲೆ | | |
| 104 | ಕಾರಾವಿಚಿಕಿತ್ಸಾಲಯ | ಬಳ್ಳಾರಿ |
| 105 | ಕಾರಾವಿಚಿಕಿತ್ಸಾಲಯ | ಟಿ.ಬಿ. ಡ್ಯಾಂ |
| ಬಿಜಾಪುರಜಿಲ್ಲೆ | | |
| 106 | ಕಾರಾವಿಚಿಕಿತ್ಸಾಲಯ | ಬಿಜಾಪುರ |
| ಗುಲ್ಬರ್ಗಾಜಿಲ್ಲೆ | | |
| 107 | ಕಾರಾವಿಚಿಕಿತ್ಸಾಲಯ | ಎಂ.ಎಸ್.ಕೆ. ಮಿಲ್ಸ್ |
| 108 | ಕಾರಾವಿಚಿಕಿತ್ಸಾಲಯ | ಮಳ್ಖೇಡ |
| 109 | ಕಾರಾವಿಚಿಕಿತ್ಸಾಲಯ | ಸೇಡಂ |
| 110 | ಕಾರಾವಿಚಿಕಿತ್ಸಾಲಯ | ಶಹಬಾದ |
| 111 | ಕಾರಾವಿಚಿಕಿತ್ಸಾಲಯ | ವಾಡಿ |

| | | |
|---|---|---|
| ರಾಯಚೂರುಜಿಲ್ಲೆ | | |
| 112 | ಕಾರಾವಿಚಿಕಿತ್ಸಾಲಯ | ರಾಯಚೂರು |
| ಕೊಪ್ಪಳಜಿಲ್ಲೆ | | |
| 113 | ಕಾರಾವಿಚಿಕಿತ್ಸಾಲಯ | ಕೊಪ್ಪಳ |
| ಇ.ಎಸ್.ಐ.ಸಿ. ಆಸ್ಪತ್ರೆಗಳವಿವರ | | |
| 1 | ಇ.ಎಸ್.ಐ.ಸಿ. ಮಾದರಿಆಸ್ಪತ್ರೆ, ರಾಜಾಜಿನಗರ | ಬೆಂಗಳೂರು |
| 2 | ಇ.ಎಸ್.ಐ.ಸಿ. ಆಸ್ಪತ್ರೆ, ಪೀಣ್ಯ, | ಬೆಂಗಳೂರು |
| 3 | ಇ.ಎಸ್.ಐ.ಸಿ. ಆಸ್ಪತ್ರೆ, | ಕಲ್ಬುರ್ಗಿ |

# ಅನುಬಂಧ-2

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1340)

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು**

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ** ಮರುಪಾವತಿ ಸೌಲಭ್ಯ.
5. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ)** : ರೂ.30,000/- ವರೆಗೆ
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ):** ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ :** ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ):** ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-ವರೆಗೆ.**
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/- ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ ರೂ.1,00,000/-
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-ವರೆಗೆ.**
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

## ಅನುಬಂಧ-03

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1340)

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ ವಿವಿಧ ಸೌಲಭ್ಯಗಳನ್ನು ಪಡೆಯಲು ಸಲ್ಲಿಸಬೇಕಾದ ದಾಖಲೆ ಮತ್ತು ಇರುವ ಮಾನ ದಂಡಗಳು**

| ಕ್ರ.ಸಂ | ಫಲಾನುಭವಿ ಆಧಾರಿತ ಯೋಜನೆ/ ಕಾರ್ಯಕ್ರಮ | ಸೌಲಭ್ಯಗಳನ್ನು ಪಡೆಯಲು ಸಲ್ಲಿಸಬೇಕಾದ ದಾಖಲೆ ಮತ್ತು ಇರುವ ಮಾನದಂಡಗಳು |
|---|---|---|
| 01 | ಪಿಂಚಣಿ ಸೌಲಭ್ಯ: | • ನಮೂನೆ-12 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಮೂಲ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.<br>• ಫಲಾನುಭವಿಯು 60 ವರ್ಷ ಪೂರೈಸುವ ಪೂರ್ವದಲ್ಲಿ ಕನಿಷ್ಠ 3 ವರ್ಷ ಮಂಡಳಿಯ ಸದಸ್ಯತ್ವವನ್ನು ಪೂರ್ಣಗೊಳಿಸಿರಬೇಕು.<br>• ಫಲಾನುಭವಿ 12ಎ ನಮೂನೆಯಲ್ಲಿ ಜೀವಿತ ಪ್ರಮಾಣಪತ್ರವನ್ನು ಸಲ್ಲಿಸಬೇಕು ಹಾಗು ಪ್ರತಿ ವರ್ಷ ಡಿಸೆಂಬರ್ ಮಾಹೆಯ ಅಂತ್ಯದೊಳಗೆ ಜೀವಿತ ಪ್ರಮಾಣ ಪತ್ರ ಸಲ್ಲಿಸಬೇಕು.<br>• ಅರ್ಜಿದಾರರ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ ಸಲ್ಲಿಸಬೇಕು.<br>• ಸರ್ಕಾರದ ಇತರೆ ಇಲಾಖೆಗಳಿಂದ ಈಗಾಗಲೇ ಸದರಿ ಯೋಜನೆಯಡಿ ಯಾವುದೇ ಪಿಂಚಣಿಯನ್ನು ಪಡೆದಿರಬಾರದು. |
| 02 | ಕುಟುಂಬ ಪಿಂಚಣಿ ಸೌಲಭ್ಯ | • ನಮೂನೆ-12ಂ ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮೃತ ಪಿಂಚಣಿದಾರರ ಮರಣ ಪ್ರಮಾಣ ಪತ್ರ ಸಲ್ಲಿಸಬೇಕು.<br>• ಮೃತ ಫಲಾನುಭವಿಯ ಪತಿ/ಪತ್ನಿ ಎಂಬುವುದನ್ನು ಖಚಿತ ಪಡಿಸುವುದಕ್ಕೆ ಕಂದಾಯ ಇಲಾಖೆಯಿಂದ ಪಡೆದ ದಾಖಲೆ<br>• ಅರ್ಜಿದಾರರ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಅರ್ಜಿದಾರರ ಒಂದು ಭಾವ ಚಿತ್ರ. |
| 03 | ದುರ್ಬಲತೆ ಪಿಂಚಣಿ | • ನಮೂನೆ-14 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಮೂಲ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಶಾಶ್ವತ ದುರ್ಬಲತೆಯಾಗಿರುವುದಕ್ಕೆ ಕಟ್ಟಡ ಕಾರ್ಮಿಕನ ಭಾವಚಿತ್ರ (ಫೋಟೋ).<br>• ಹಿರಿಯ ನಾಗರೀಕರ ಸಬಲೀಕರಣ ಹಾಗೂ ವಿಕಲ ಚೇತನ ಇಲಾಖೆಯಿಂದ |

| | | |
|---|---|---|
| | | ಗುರುತಿನ ಚೀಟಿ ಪಡೆದ ನಂತರ 6 ತಿಂಗಳೊಳಗಾಗಿ ಅರ್ಜಿ ಸಲ್ಲಿಸಬೇಕು.<br>• ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ನಿರ್ಮಾಣ ಸ್ಥಳದಲ್ಲಿ ಆದ ಅಪಘಾತಯಿಂದಂದಾಗಿ ದುರ್ಬಲತೆಯಾಗಿರಬೇಕು.<br>• ಫಲಾನುಭವಿಗೆ ದುರ್ಬಲತೆಯಾಗಿರುವುದಕ್ಕೆ ಹಿರಿಯ ನಾಗರಿಕರ ಹಾಗೂ ಅಂಗವಿಕಲ ಸಬಲೀಕರಣ ಇಲಾಖೆ ಇವರಿಂದ ಪಡೆದ ಅಂಗವಿಕಲ ಗುರುತಿನ ಚೀಟಿಯ ಪ್ರತಿಯನ್ನು ಲಗತ್ತಿಸಬೇಕು.<br>• ಫಲಾನುಭವಿಯು ನಮೂನೆ 14ಎ ರಲ್ಲಿ ಜೀವಿತ ಪ್ರಮಾಣ ಪತ್ರ ಸಲ್ಲಿಸಬೇಕು ಹಾಗೂ ಪ್ರತಿ ವರ್ಷ ಡಿಸೆಂಬರ್ ಮಾಹೆಯ ಅಂತ್ಯದೊಳಗೆ ಜೀವಿತ ಪ್ರಮಾಣ ಪತ್ರ ಸಲ್ಲಿಸಬೇಕು. |
| 04 | ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ | • ನಮೂನೆ-14ಸಿ ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಫಲಾನುಭವಿಯು ಸರ್ಕಾರಿ / ಸರ್ಕಾರದಿಂದ ಮಾನ್ಯತೆ ಪಡೆದ (ಶೆಡ್ಯೂಲ್ 1ಗೆ ಸೇರಿದ) ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದಿರುವ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.<br>• ಫಲಾನುಭವಿ ಒಂದು ಬಾರಿ ಮಾತ್ರ ತನಗೆ ಅಥವಾ ಕುಟುಂಬದ ಇಬ್ಬರು ಸದಸ್ಯರಿಗಾಗಿ ಪಡೆಯಬಹುದಾಗಿದೆ.<br>• ಸರ್ಕಾರದ ಇತರೆ ಇಲಾಖೆಗಳಿಂದ ಸದರಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆದಿರಬಾರದು. |
| 05 | ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) | • ನಮೂನೆ-15 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಫಲಾನುಭವಿಯ ಸದಸ್ಯತ್ವ ಅವಧಿಯಲ್ಲಿ ಒಂದು ಬಾರಿ ಮಾತ್ರ ಈ ಸೌಲಭ್ಯವನ್ನು ಪಡೆದಿರುವ ಬಗ್ಗೆ ಖಾತ್ರಿ ಪಡಿಸಿಕೊಳ್ಳಬೇಕು.<br>• ಫಲಾನುಭವಿಯು ತರಬೇತಿ ಪಡೆಯಲು 55 ವರ್ಷ ವಯಸ್ಸಿನ ಒಳಗಿರಬೇಕು. |
| 06 | ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ | |
| 07 | ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ) | • ನಮೂನೆ-16 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ<br>• ಅರ್ಜಿ ಸಲ್ಲಿಸುವ ಫಲಾನುಭವಿಗೆ ಕನಿಷ್ಠ 45 ವರ್ಷ ವಯಸ್ಸಾಗಿರಬೇಕು<br>• ಸರ್ಕಾರದಿಂದ ಯಾವುದಾದರೂ ಯೋಜನೆಯಡಿ ಮನೆ ನಿರ್ಮಾಣಕ್ಕಾಗಿ ಸಾಲ |

| | | |
|---|---|---|
| | | ಮಂಜೂರಾಗಿರಬೇಕು<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್‌ಬುಕ್‌ನ ಪ್ರತಿ ಸಲ್ಲಿಸುವುದು |
| ೦೮ | ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್) | • ನಮೂನೆ-17 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ನೋಂದಾಯಿತ ಮಹಿಳಾ ಫಲಾನುಭವಿಯು ತನ್ನ ಮೊದಲ 2 ಹೆರಿಗೆಗಳಿಗೆ ಸಹಾಯಧನವನ್ನು ಪಡೆಯಲು ಅರ್ಹರಾಗಿರುತ್ತಾಳೆ. (ಕೇವಲ ಎರಡು ಜೀವಂತ ಮಕ್ಕಳಿದ್ದಾರೆ ಎನ್ನುವುದನ್ನು ಖಚಿತ ಪಡಿಸಿಕೊಳ್ಳಬೇಕು.)<br>• ಇದು ಎರಡನೇ ಹೆರಿಗೆ ಎಂದು ಅಫಿಡವಿಟ್ ಸಲ್ಲಿಸಬೇಕು.<br>• ಜನನ ಮತ್ತು ಮರಣ ಪ್ರಮಾಣ ನೊಂದಣಾಧಿಕಾರಿಗಳಿಂದ ಪಡೆದ ಜನನ ಪ್ರಮಾಣ ಪತ್ರ ಸಲ್ಲಿಸಬೇಕು.<br>• ಹೆರಿಗೆಯಾದ 6 ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸಬೇಕು |
| ೦೯ | ಶಿಶು ಪಾಲನಾ ಸೌಲಭ್ಯ | – |
| 10 | ಅಂತ್ಯಕ್ರಿಯೆ ವೆಚ್ಚ | • ನಮೂನೆ-18 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಮೂಲ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಮೃತ ಫಲಾನುಭವಿಯ ಮೂಲ / ದೃಢೀಕೃತ ಮರಣ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.<br>• ಮೃತ ಫಲಾನುಭವಿಯ ವಯಸ್ಸು 60 ವರ್ಷ ಮೀರದಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳಬೇಕು.<br>• ಅರ್ಜಿದಾರನನ್ನು ಮೃತ ಫಲಾನುಭವಿಯ ನಾಮನಿರ್ದೇಶಿತನಾಗಿ ನೋಂದಾಯಿಸಲಾಗಿದೆಯೇ ಎಂದು ಖಚಿತ ಪಡಿಸಿಕೊಳ್ಳಬೇಕು.<br>• ಫಲಾನುಭವಿಯು ಮೃತನಾದ ಒಂದು ವರ್ಷದೊಳಗೆ ಅರ್ಜಿಯನ್ನು ಸಲ್ಲಿಸಬೇಕು.. |
| 11 | ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ) | • ನಮೂನೆ-19 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ |

| | | |
|---|---|---|
| | | ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಫಲಾಭವಿಯ ಮಗ / ಮಗಳು ಉತ್ತೀರ್ಣ ಆಗಿರುವ ಕುರಿತು ಅಂಕಪಟ್ಟಿ ಹಾಗೂ ವ್ಯಾಸಂಗ ಮಾಡುತ್ತಿರುವ ಸಂಸ್ಥೆಯ ಮುಖ್ಯಸ್ಥರಿಂದ ವ್ಯಾಸಂಗ ಮೂಲ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.<br>• ಫಲಾನುಭವಿಯ ಪ್ರಸ್ತುತ ಅರ್ಜಿಯು ಈ ಹಿಂದೆ ಶೈಕ್ಷಣಿಕ ಸಹಾಯಧನ ಪಡೆದ ಇಬ್ಬರು ಮಕ್ಕಳಿಗೆ ಅನ್ವಯಿಸಲಾಗಿದೆಯೇ ಎಂದು ಖಾತ್ರಿ ಪಡಿಸಿಕೊಳ್ಳಬೇಕು.<br>• ಶೈಕಣಿಕ ಸಹಾಯಧನ ಅರ್ಜಿಯನ್ನು ಶೈಕ್ಷಣಿಕ ವರ್ಷ ಪ್ರಾರಂಭವಾದ ದಿನದಿಂದ 6 ತಿಂಗಳ ಒಳಗೆ ಸಲ್ಲಿಸಬೇಕು.<br>• ನೋಂದಣಿಯಾದ ತಕ್ಷಣ ಸಹಾಯಧನ ಪಡೆಯಬಹುದು. |
| 12 | ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ) | • ನಮೂನೆ-20 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಲ್ಲಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ಫಲಾನುಭವಿಯು ಆಸ್ಪತ್ರೆಯಲ್ಲಿ ದಾಖಲಾದ ದಿನಾಂಕ ಹಾಗೂ ಬಿಡುಗಡೆಯಾದ ದಿನಾಂಕ ವಿವರಗಳನ್ನು ನಮೂದಿಸಬೇಕು.<br>• ಫಲಾನುಭವಿಯು ಸರ್ಕಾರಿ / ಸರ್ಕಾರದಿಂದ ಮಾನ್ಯತೆ ಪಡೆದ (ಶೆಡ್ಯೂಲ್ 1ಗೆ ಸೇರಿದ) ಖಾಸಗಿ ಆಸ್ಪತ್ರೆಗಳಲ್ಲಿ ಕನಿಷ್ಠ ಎರಡು ದಿನ ಒಳರೋಗಿಯಾಗಿ ದಾಖಲಾಗಿರುವ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.<br>• ಆಸ್ಪತ್ರೆಗೆ ದಾಖಲಾದ ದಿನಾಂಕದಿಂದ 6 ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸಬೇಕು<br>• ನೋಂದಣಿಯಾದ ತಕ್ಷಣ ಸಂಭವಿಸಬಹುದಾದ ಖಾಯಿಲೆಗೆ ತಕ್ಷಣ ಸಹಾಯಧನ ಪಡೆಯಬಹುದು. |
| 13 | ಅಪಘಾತ ಪರಿಹಾರ | • ನಮೂನೆ-21 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಮೂಲ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಪ್ರಥಮ ವರ್ತಮಾನ ವರದಿ ಹಾಗೂ ಪೋಸ್ಟ್ ಮಾರ್ಟಮ್ ರಿಪೋರ್ಟ್ ಪ್ರತಿ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ದೃಢೀಕೃತ ಮರಣ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.<br>• ಅಪಘಾತದ ಸ್ವರೂಪವನ್ನು ನಮೂದಿಸಬೇಕು.<br>• ದುರ್ಬಲತೆ ಪ್ರಕರಣವಿದ್ದಲ್ಲಿ, ಅಪಘಾತದ ಪರಿಣಾಮವಾಗಿರುವ ಶಾಶ್ವತ-ಸಂಪೂರ್ಣ (ಪ್ರತಿ ಶತಃ 100ರಷ್ಟು) ಅಥವಾ ಶಾಶ್ವತ-ಭಾಗಶಃ (ಪ್ರತಿ ಶತಃ 100ಕ್ಕಿಂತ ಕಡಿಮೆ) ದುರ್ಬಲತೆಯಾದ ಬಗ್ಗೆ ಹಾಗೂ ದುರ್ಬಲತೆಯ |

| | | |
|---|---|---|
| | | ಶೇಕಡವಾರು ಪ್ರಮಾಣ ನಮೂದಿಸಬೇಕು.<br>• ಫಲಾನುಭವಿಗೆ ದುರ್ಬಲತೆಯಾದ ನಂತರ ತಪಾಸಣೆ ಮಾಡಿದ ಸರ್ಕಾರಿ / ಸರ್ಕಾರದ ಮಾನ್ಯತೆ ಪಡೆದ ಖಾಸಗಿ ಆಸ್ಪತ್ರೆ ವೈದ್ಯರಿಂದ ಶೇಕಡವಾರು ದುರ್ಬಲತೆ ಖಚಿತ ಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಲಗತ್ತಿಸುವುದು.<br>• ನಮೂನೆ 21ಎ ನಲ್ಲಿ ನಿಯೋಜಕರಿಂದ ಪಡೆದ ವರದಿಯನ್ನು ಸಲ್ಲಿಸಬೇಕು.<br>• ಅಪಘಾತ ಸಂಭವಿಸಿದ ಒಂದು ವರ್ಷದೊಳಗೆ ಅರ್ಜಿಯನ್ನು ಸಲ್ಲಿಸಬೇಕು. |
| 14 | ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ) | • ನಮೂನೆ-22 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ನಮೂನೆ-22 (ಎ) ರಲ್ಲಿ ಚಿಕಿತ್ಸೆ ನೀಡಿದ ವೈದ್ಯರಿಂದ ಮಾಹಿತಿಯನ್ನು ಭರ್ತಿ ಮಾಡಿ ಸಲ್ಲಿಸುವುದು<br>• ಮಂಡಳಿಯ ಚಾಲ್ತಿಯಲ್ಲಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ .<br>• ಸರ್ಕಾರಿ/ಸರ್ಕಾರದಿಂದ ಮಾನ್ಯತೆ ಪಡೆದ ಖಾಸಗಿ ಆಸ್ಪತ್ರೆ/ಆರ್.ಎಸ್.ಬಿ.ವೈ. ಯೋಜನೆಯಿಂದ ಮಾನ್ಯತೆ ಪಡೆದ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದಿರಬೇಕು.<br>• ಆಸ್ಪತ್ರೆಯಿಂದ ಬಿಡುಗಡೆಯಾದ 6 ತಿಂಗಳೊಳಗಾಗಿ ಅರ್ಜಿ ಸಲ್ಲಿಸಬೇಕು<br>• ಚಿಕಿತ್ಸೆ ಪಡೆದ ಮೂಲ ವೈದ್ಯಕೀಯ ದಾಖಲೆಗಳನ್ನು ಮತ್ತು ಬಿಲ್ಲುಗಳನ್ನು ಸಲ್ಲಿಸುವುದು<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್‌ಬುಕ್‌ನ ಪ್ರತಿ ಸಲ್ಲಿಸುವುದು |
| 15 | ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್) | • ಮದುವೆಯ ಸಹಾಯಧನ ಪಡೆಯಲು ಫಲಾನುಭವಿಯಾಗಿ 01 ವರ್ಷ ಪೂರ್ಣಗೊಂಡಿರಬೇಕು.<br>• ನಮೂನೆ-23 ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ<br>• ನೋಂದಣಿಯಾಗಿ ಒಂದು ವರ್ಷ ಪೂರೈಯಿಸಿದ ನಂತರ ಫಲಾನುಭವಿ/ಮಕ್ಕಳಿಗೆ ಮದುವೆಯಾಗಿರಬೇಕು<br>• ಮದುವೆಯಾದ 6 ತಿಂಗಳ ಒಳಗಾಗಿ ಅರ್ಜಿ ಸಲ್ಲಿಸಬೇಕು<br>• ಫಲಾನುಭವಿಯು ಹೊಂದಿರುವ ಬ್ಯಾಂಕ್ ಪಾಸ್‌ಬುಕ್‌ನ ಪ್ರತಿ ಸಲ್ಲಿಸುವುದು |
| 16 | ಐಕ್ಯು ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ) | • ನಮೂನೆ-23 (ಎ) ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ<br>• ಫಲಾನುಭವಿಯ ಕುಟುಂಬದ ಒಬ್ಬ ಸದಸ್ಯರು ಮಾತ್ರ ಸೌಲಭ್ಯ ಪಡೆಯಲು ಅವಕಾಶವಿರುತ್ತದೆ. |

| | | |
|---|---|---|
| | | • ಆಧಾರ್ ಕಾರ್ಡ್, ಪಡಿತರ ಚೀಟಿ ಮತ್ತು ನೋಟರಿಯಿಂದ ಪಡೆದ ಅಫಿಡೆವಿಟ್ ಅಥವಾ ಆಹಾರ ನೀರೀಕ್ಷಕರಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸುವುದು. |
| 17 | ಬಿಎಂಟಿಸಿ ಬಸ್ ಪಾಸ್ ಸೌಲಭ್ಯ | • ನಮೂನೆ-23 (ಬಿ) ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ<br>• ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಖಾಯಂ ವಿಳಾಸ ಹೊಂದಿರುವ ಫಲಾನುಭವಿಯಾಗಿರಬೇಕು<br>• ಆಧಾರ್ ಕಾರ್ಡ್ ಮತ್ತು ಪಡಿತರ ಚೀಟಿ ಪ್ರತಿ ಸಲ್ಲಿಸುವುದು.<br>• ಬಿಎಂಟಿಸಿ ಸಂಸ್ಥೆ ನೀಡುವ ಬಸ್ ಪಾಸ್ ಅರ್ಜಿಯನ್ನು ಭರ್ತಿ ಮಾಡಿ ಸಲ್ಲಿಸುವುದು. |
| 18 | ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ | • ನಮೂನೆ-23 (ಸಿ) ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ<br>• ಮಂಡಳಿಯಿಂದ ನೀಡಿರುವ ಗುರುತಿನ ಚೀಟಿ/ಸ್ಮಾರ್ಟ್ ಕಾರ್ಡ್ ಪ್ರತಿ ಸಲ್ಲಿಸುವುದು<br>• ಫಲಾಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ<br>• ಫಲಾನುಭವಿಯ ಇಬ್ಬರು ಮಕ್ಕಳಿಗೆ ಮಾತ್ರ ಖಾಯಂ ವಿಳಾಸದಿಂದ ವಿದ್ಯಾ ಸಂಸ್ಥೆಯವರಿಗೆ ಕೆ.ಎಸ್.ಆರ್.ಟಿ.ಸಿ. ಬಸ್‌ಪಾಸ್ ಸೌಲಭ್ಯ ಪಡೆಯಲು ಅವಕಾಶವಿರುತ್ತದೆ.<br>• ಆಧಾರ್ ಕಾರ್ಡ್ ಮತ್ತು ಪಡಿತರ ಚೀಟಿ ಪ್ರತಿ ಸಲ್ಲಿಸುವುದು.<br>• ಕೆ.ಎಸ್.ಆರ್.ಟಿ.ಸಿ. ಸಂಸ್ಥೆ ನೀಡುವ ಬಸ್ ಪಾಸ್ ಅರ್ಜಿಯನ್ನು ಭರ್ತಿ ಮಾಡಿ ಸಲ್ಲಿಸುವುದು |
| 19 | ತಾಯಿ ಮಗು ಸಹಾಯ ಹಸ್ತ | • ನಮೂನೆ-17-ಎ ರಲ್ಲಿ ಪೂರ್ಣವಾದ ಮಾಹಿತಿಯನ್ನು ಭರ್ತಿ ಮಾಡಿದ ಅರ್ಜಿ.<br>• ಮಂಡಳಿಯಿಂದ ನೀಡಿರುವ ಚಾಲ್ತಿಯಿರುವ ಗುರುತಿನ ಚೀಟಿ / ಸ್ಮಾರ್ಟ್ ಕಾರ್ಡ್ ಸಲ್ಲಿಸುವುದು.<br>• ಫಲಾನುಭವಿಯು ವಂತಿಕೆ ಹಣ ಪೂರ್ಣವಾಗಿ ಪಾವತಿಸಿರುವ ಬಗ್ಗೆ ನೋಂದಣಿ ಅಧಿಕಾರಿಗಳಿಂದ ದೃಢೀಕರಣ ಪತ್ರ.<br>• ಫಲಾನುಭವಿ ಹೊಂದಿರುವ ಬ್ಯಾಂಕ್ ಪಾಸ್ ಪುಸ್ತಕದ ಪ್ರತಿ.<br>• ನೋಂದಾಯಿತ ಮಹಿಳಾ ಫಲಾನುಭವಿಯು ತನ್ನ ಮೊದಲ ಎರಡು ಹೆರಿಗೆಗಳಿಗೆ ಸಹಾಯಧನವನ್ನು ಪಡೆಯಲು ಅರ್ಹರಾಗಿರುತ್ತಾಳೆ.<br>• ಎರಡನೇ ಹೆರಿಗೆಗೆ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಫಿಡೆವಿಟ್ ಸಲ್ಲಿಸಬೇಕು.<br>• ಜನನ ಮತ್ತು ಮರಣ ಪ್ರಮಾಣ ಅಧಿಕಾರಿಗಳಿಂದ ಜನನ ಪ್ರಮಾಣ ಪತ್ರ ಸಲ್ಲಿಸಬೇಕು.<br>• ಹೆರಿಗೆಯಾದ 6 ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸಬೇಕು |

# ಅನುಬಂಧ-4

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1340)

ಹಾಸನ ಜಿಲ್ಲೆಯಲ್ಲಿ ಕಟ್ಟಡ ಕಾರ್ಮಿಕರಿಗೆ 2018-19 ನೇ ಸಾಲಿನಲ್ಲಿ ಮಂಜೂರು ಮಾಡಿದ ಧನ ಸಹಾಯದ ವಿವರ.

| Sl. No | Taluk | ಶೈಕ್ಷಣಿಕ ಧನ ಸಹಾಯ | | ಮದುವೆ ಧನ ಸಹಾಯ | | ವೈದ್ಯಕೀಯ ಧನಸಹಾಯ | | ಹೆರಿಗೆ ಧನಸಹಾಯ | | ಅಂತ್ಯ ಸಂಸ್ಕಾರ | | ಅಪಘಾತ ಮರಣ | |
|---|---|---|---|---|---|---|---|---|---|---|---|---|---|
| | | ಕ್ಲೈಂ ಸಂಖ್ಯೆ | ಮೊತ್ತ | ಕ್ಲೈಂ ಸಂಖ್ಯೆ | ಮೊತ್ತ | ಕ್ಲೈಂ ಸಂಖ್ಯೆ | ಮೊತ್ತ | ಕ್ಲೈಂ ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | ಆಲೂರು | 326 | 3092770 | 73 | 3650000 | 9 | 445734 | 5 | 75000 | 0 | 0 | 0 | 0 |
| 2 | ಹಾಸನ | 2569 | 19052080 | 201 | 10050000 | 60 | 2183791 | 1 | 30000 | 41 | 22014000 | 3 | 1300000 |
| 3 | ಬೇಲೂರು | 324 | 2412090 | 30 | 1500000 | 4 | 91000 | 1 | 15000 | 3 | 162000 | 0 | 0 |
| 4 | ಸಕಲೇಶಪುರ | 96 | 761590 | 12 | 600000 | 0 | 0 | 0 | 0 | 6 | 324000 | 0 | 0 |
| 6 | ಅರಕಲಗೂಡು | 361 | 2673000 | 28 | 1400000 | 2 | 2400 | 0 | 0 | 7 | 378000 | 1 | 50000 |
| 7 | ಅರಸೀಕೆರೆ | 377 | 2199000 | 40 | 2000000 | 4 | 157700 | 1 | 15000 | 7 | 3780000 | 0 | 0 |
| 8 | ಚನ್ನರಾಪಟ್ಟಣ | 765 | 6073660 | 75 | 3750000 | 5 | 193300 | 2 | 35000 | 12 | 6480000 | 0 | 0 |
| 9 | ಹೊಳೆನರಸೀಪುರ | 542 | 3661840 | 42 | 2100000 | 1 | 17250 | 0 | 0 | 11 | 594000 | 0 | 0 |
| | ಒಟ್ಟು | **5360** | **39926030** | **501** | **25050000** | **85** | **3091175** | **10** | **170000** | **87** | **4698000** | **4** | **1800000** |

# ಅನುಬಂಧ-4ಎ

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1340)

ಹಾಸನ ಜಿಲ್ಲೆಯಲ್ಲಿ ಕಟ್ಟಡ ಕಾರ್ಮಿಕರಿಗೆ 2019-20 ನೇ ಸಾಲಿನಲ್ಲಿ ಮಂಜೂರು ಮಾಡಿದ ಧನ ಸಹಾಯದ ವಿವರ.

| ಕ್ರ ಸಂ. | ತಾಲ್ಲೂಕು/ಕಛೇರಿ | ಶೈಕ್ಷಣಿಕ ಧನ ಸಹಾಯ | | ಮದುವೆ ಧನ ಸಹಾಯ | | ವೈದ್ಯಕೀಯ ಧನಸಹಾಯ | | ಹೆರಿಗೆ ಧನಸಹಾಯ | | ಅಂತ್ಯ ಸಂಸ್ಕಾರ | | ಅಪಘಾತ ಮರಣ | | ಶಾಶ್ವತ ದುರ್ಬಲತೆ | |
|---|---|---|---|---|---|---|---|---|---|---|---|---|---|---|---|
| | | ಕ್ಲೈಂ ಸಂಖ್ಯೆ | ಮೊತ್ತ | ಕ್ಲೈಂ ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | ಆಲೂರು | 1075 | 9167590 | 64 | 3200000 | 04 | 154633 | 0 | 0 | 0 | 0 | 0 | 0 | 0 | 0 |
| 2 | ಬೇಲೂರು | 368 | 3232000 | 36 | 1800000 | 01 | 40000 | 0 | 0 | 04 | 216000 | 0 | 0 | 0 | 0 |
| 3 | ಸಕಲೇಶಪುರ | 181 | 1636590 | 23 | 1150000 | 0 | 0 | 0 | 0 | 0 | 0 | 0 | 0 | 0 | 0 |
| 4 | ಹಾಸನ | 3155 | 26529170 | 206 | 10300000 | 61 | 3289242 | 0 | 0 | 41 | 2214000 | 0 | 0 | 01 | 150000 |
| 5 | ಅರಕಲಗೂಡು | 387 | 3189000 | 41 | 2050000 | 01 | 21500 | 0 | 0 | 08 | 432000 | 01 | 300000 | 0 | 0 |
| 6 | ಅರಸೀಕೆರೆ | 568 | 4231000 | 58 | 2900000 | 01 | 70000 | 0 | 0 | 08 | 432000 | 0 | 0 | 0 | 0 |
| 7 | ಚನ್ನರಾಯಪಟ್ಟಣ | 1036 | 8818500 | 129 | 6450000 | 05 | 483500 | 2 | 50000 | 09 | 486000 | 01 | 200000 | 0 | 0 |
| 8 | ಹೊಳೆನರಸೀಪುರ | 468 | 3908000 | 52 | 2600000 | 0 | 0 | 0 | 0 | 06 | 324000 | 01 | 500000 | 0 | 0 |
| | **ಒಟ್ಟು** | **7238** | **60711850** | **609** | **30450000** | **73** | **058875** | **2** | **50000** | **76** | **4104000** | **03** | **1000000** | **01** | **150000** |

# ಅನುಬಂಧ-5

(ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ:1340)

**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಡಿ ಪ್ರಯೋಜನ ಪಡೆದ ಫಲಾನುಭವಿಗಳ ತಾಲ್ಲೂಕುವಾರು ವಿವರ**

| ಕ್ರಸಂ | ತಾಲ್ಲೂಕು | ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ | | ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆಯಡಿ ನೋಂದಾಯಿತರಾದ ಅಸಂಘಟಿತ ಕಾರ್ಮಿಕರ ಸಂಖ್ಯೆ |
|---|---|---|---|---|
| | | ಅಪಘಾತ ಪರಿಹಾರ ಸೌಲಭ್ಯ | ಶೈಕ್ಷಣಿಕ ಧನಸಹಾಯ | |
| 1 | ಹಾಸನ | 07 | 06 | 471 |
| 2 | ಸಕಲೇಶಪುರ | 01 | 02 | 130 |
| 3 | ಆಲೂರು | 02 | 02 | 44 |
| 4 | ಚನ್ನರಾಯಪಟ್ಟಣ | 02 | 00 | 145 |
| 5 | ಹೊಳೆನರಸಿಪುರ | 00 | 00 | 175 |
| 6 | ಅರಕಲಗೂಡು | 03 | 00 | 161 |
| 7 | ಅರಸಿಕೇರೆ | 01 | 00 | 362 |
| 8 | ಬೇಲೂರು | 00 | 00 | 405 |
| ಒಟ್ಟು | | **16** | **10** | **1893** |

## ಅನುಬಂಧ-6

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1340)

2018-19ನೇ ಸಾಲಿಗೆ ಕಾರ್ಮಿಕ ಕಲ್ಯಾಣ ಯೋಜನೆಯಡಿ ಹಾಸನ ಜಿಲ್ಲೆಯಲ್ಲಿ ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ.

| 2018-19 ನೇ ಸಾಲಿನ ವಿವರ | | | | 2019-20 ನೇ ಸಾಲಿನ ಮಾಹಿತಿ ವಿವರ | | | |
|---|---|---|---|---|---|---|---|
| ಕ್ರ. ಸಂ | ತಾಲ್ಲೂಕು | ಫಲಾನುಭವಿಗಳು | ಮೊತ್ತ | ಕ್ರ ಸಂ | ತಾಲ್ಲೂಕು | ಫಲಾನುಭವಿಗಳು | ಮೊತ್ತ |
| 1 | ಬೇಲೂರು | 29 | 153000 | 1 | ಬೇಲೂರು | 29 | 121000 |
| 2 | ಸಕಲೇಶಪುರ | 89 | 414000 | 2 | ಸಕಲೇಶಪುರ | 27 | 110000 |
| 3 | ಆಲೂರು | 177 | 607000 | 3 | ಆಲೂರು | 561 | 2125000 |
| 4 | ಅರಸೀಕೆರೆ | 19 | 81000 | 4 | ಅರಸೀಕೆರೆ | 37 | 129000 |
| 5 | ಅರಕಲಗೂಡು | 22 | 109000 | 5 | ಅರಕಲಗೂಡು | 53 | 190000 |
| 6 | ಹಾಸನ | 75 | 393000 | 6 | ಹಾಸನ | 394 | 1588000 |
| 7 | ಹೊಳೆನರಸೀಪುರ | 11 | 40000 | 7 | ಹೊಳೆನರಸೀಪುರ | 78 | 314000 |
| 8 | ಚೆನ್ನರಾಯಪಟ್ಟಣ | 52 | 201000 | 8 | ಚೆನ್ನರಾಯಪಟ್ಟಣ | 36 | 132000 |
| | **ಒಟ್ಟು** | **474** | **19,98,000** | **ಒಟ್ಟು** | | **1202** | **4,64,000** |